# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 543 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ.ಎ.ತಿಪ್ಪೇಸ್ವಾಮಿ (ನಾಮನಿರ್ದೇಶಿತ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 09.03.2020 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ತುಮಕೂರು ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ಆಶ್ರಯದಲ್ಲಿ ಎಷ್ಟು ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯಗಳಿವೆ; (ತಾಲ್ಲೂಕುವಾರು ವಿವರ ನೀಡುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ತುಮಕೂರು ಜಿಲ್ಲೆಯಲ್ಲಿ ಒಟ್ಟು 113 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿವೆ. ತಾಲ್ಲೂಕುವಾರು ವಿದ್ಯಾರ್ಥಿನಿಲಯಗಳ ವಿವರ ಕೆಳಕಂಡಂತಿವೆ. (ಕೆಳಗಿನ ಕೋಷ್ಟಕ) |

| ಕ್ರ.ಸಂ. | ತಾಲ್ಲೂಕು | ವಿದ್ಯಾರ್ಥಿನಿಲಯಗಳ ಸಂಖ್ಯೆ |
|---|---|---|
| 1 | ಚಿಕ್ಕನಾಯಕನಹಳ್ಳಿ | 10 |
| 2 | ಗುಬ್ಬಿ | 05 |
| 3 | ಪಾವಗಡ | 13 |
| 4 | ತುಮಕೂರು | 20 |
| 5 | ತುರುವೇಕೆರೆ | 09 |
| 6 | ತಿಪಟೂರು | 12 |
| 7 | ಮಧುಗಿರಿ | 08 |
| 8 | ಶಿರಾ | 18 |
| 9 | ಕೊರಟಗೆರೆ | 10 |
| 10 | ಕುಣಿಗಲ್ | 08 |
| | ಒಟ್ಟು | 113 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಆ | ತುಮಕೂರು ಜಿಲ್ಲೆಯಲ್ಲಿ ವಿದ್ಯಾರ್ಥಿಗಳ ಉತ್ತಮ ವ್ಯಾಸಂಗದ ಹಿತದೃಷ್ಟಿಯಿಂದ ಹೆಚ್ಚುವರಿ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ತುಮಕೂರು ಜಿಲ್ಲೆ, ತುಮಕೂರು ಟೌನ್ ಹಾಗೂ ಚಿಕ್ಕನಾಯಕನಹಳ್ಳಿ ಟೌನ್ ಗೆ ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯದ ಮಂಜೂರಾತಿಗೆ ಬೇಡಿಕೆ ಇರುತ್ತದೆ. |
| ಇ | ಹಾಗಿದ್ದಲ್ಲಿ, ಜಿಲ್ಲೆಯಲ್ಲಿ ಎಷ್ಟು ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡಲಾಗಿದೆ; (ತಾಲ್ಲೂಕುವಾರು ವಿವರ ನೀಡುವುದು) | ಪ್ರಸ್ತುತ ಯಾವುದೇ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡಿರುವುದಿಲ್ಲ.<br>ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಅನುದಾನದ ಲಭ್ಯತೆಯನ್ನು ಅವಲಂಬಿಸಿರುತ್ತದೆ. |
| ಈ | ತುಮಕೂರು ಜಿಲ್ಲೆಯಲ್ಲಿ ಬಾಡಿಗೆ ಕಟ್ಟಡಗಳಲ್ಲಿ ನಡೆಸುತ್ತಿರುವ ನಿಲಯಗಳೆಷ್ಟು; ಈ ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಸರ್ಕಾರ ಎಷ್ಟು ಅನುದಾನವನ್ನು ಪ್ರಸ್ತುತ ವರ್ಷದಲ್ಲಿ ಒದಗಿಸಲಾಗಿದೆ? (ತಾಲ್ಲೂಕುವಾರು ಮಾಹಿತಿ ನೀಡುವುದು) | ತುಮಕೂರು ಜಿಲ್ಲೆಯಲ್ಲಿನ ಒಟ್ಟು 113 ವಿದ್ಯಾರ್ಥಿನಿಲಯಗಳ ಪೈಕಿ 39 ವಿದ್ಯಾರ್ಥಿನಿಲಯಗಳು ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುತ್ತವೆ.<br>ಈ ಪೈಕಿ 12 ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣವಾಗುತ್ತಿದ್ದು, ಸದರಿ ಕಟ್ಟಡಗಳ ಪೈಕಿ ಪ್ರಸ್ತುತ ವರ್ಷದಲ್ಲಿ ಈ ಕೆಳಕಂಡ 4 ವಿದ್ಯಾರ್ಥಿನಿಲಯಗಳ ಕಟ್ಟಡಗಳ ನಿರ್ಮಾಣಕ್ಕೆ ಅನುದಾನ ಒದಗಿಸಲಾಗಿದ್ದು, ಒದಗಿಸಿರುವ ಅನುದಾನದ ವಿವರ ಕೆಳಕಂಡಂತಿದೆ. |

| ಕ್ರ. ಸಂ. | ತಾಲ್ಲೂಕು | ವಿದ್ಯಾರ್ಥಿನಿಲಯದ ಹೆಸರು | ಒದಗಿಸಲಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 1 | ತುಮಕೂರು | ಮೆಟ್ರಿಕ್ ನಂತರದ ವೃತ್ತಿಪರ ಬಾಲಕಿಯರ ವಿದ್ಯಾರ್ಥಿನಿಲಯ, ತುಮಕೂರು ಟೌನ್ (2448) | 320.00 |
| 2 | ತಿಪಟೂರು | ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯ, ತಿಪಟೂರು ಟೌನ್. (2435) | 485.00 |
| 3 | ಮಧುಗಿರಿ | ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯ, ಮಧುಗಿರಿ ಟೌನ್. (2416) | 460.00 |
| 4 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್-ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಹೊಯ್ಸಳಕಟ್ಟೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು. (1096) | 198.00 |

ಸಂಖ್ಯೆ:ಹಿಂವಕ 138 ಬಿಎಂಎಸ್ 2020

(ಶ್ರೀರಾಮುಲು)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ